

ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಸಂಪುಟ: ೦೨ ಸಂಚಿಕೆ: ೦೪ | ಜುಲೈ ೨೦೧೫ | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 02 Issue 04 | July 2015 | Editor : Sri. B.R. Ravindranath




**ಚಂದಾ ವಿವರಗಳು**

**ವಾರ್ಷಿಕ ಚಂದಾ**
**ರೂ. ೨೦/-**
**ಐದು ವರ್ಷಗಳ ಚಂದಾ**
**ರೂ. ೧೦೦/-**


ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ:
೨೬೬೧೫೪೭೭, ೨೬೬೭೬೭೭೩
ಇಮೇಲ್ : bmsritrust@gmail.com


**ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಜೂನ್2015 ತಿಂಗಳಿನಲ್ಲಿ ನಡೆದ ಕಾರ್ಯಕ್ರಮಗಳು**

## ‘ಅಕ್ಕರ ಗೊಟ್ಟಿ' (ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ)

ದಿನಾಂಕ 13-06-2015 ರಂದು ನಡೆದ ‘ಅಕ್ಕರ ಗೊಟ್ಟಿ' (ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ)ಯ ಕಾರ್ಯಕ್ರಮದಲ್ಲಿ ಡಾ.ಪಿ.ವಿ. ನಾರಾಯಣ ಅವರು ಪಂಪ ಕವಿಯ “ವಿಕ್ರಮಾರ್ಜುನ ವಿಜಯ” ದ

ಚಲದೊಳ್ ದುರ್ಯೋಧನಂ ನನ್ನಿಯೊಳಿನತಯಂ ಗಂಡಿನೊಳ್ ಭೀಮಸೇನಂ
ಬಲದೊಳ್ ಮದ್ರೇಶನತ್ಯುನ್ನತಿಯೊಳಮರ ಸಿಂಧೂದ್ಭವಂ ಚಾಪವಿದ್ಯಾ
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ
ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ ॥
(ಪಂಪಭಾರತ. ಆಶ್ವಾಸ 14, ಪದ್ಯ 64)

-ಎಂಬ ಸುಪ್ರಸಿದ್ಧ ಹಾಗೂ ಚರ್ಚೆಗೆ ಒಳಗಾದ ಪದ್ಯದ ಮೂಲ ಆಶಯದ ಚಿಂತನೆ ನಡೆಸಲು ಈ ಪದ್ಯವನ್ನು ಓದುವುದರ ಮೂಲಕ ‘ಅಕ್ಕರ ಗೊಟ್ಟಿ' - ತಿಂಗಳ ಮುಕ್ತ ಸಂಸ್ಕೃತಿ ಚಿಂತನೆಗೆ ಚಾಲನೆ ಕೊಟ್ಟರು. ಜೊತೆಗೆ ಪಂಪ ಚಿತ್ರಿಸಿದ ಪಾತ್ರಗಳು ಒಂದೊಂದು ಗುಣಕ್ಕೆ ಸಂಕೇತವಾಗಿದ್ದಾರೆ; ಪುರುಷರ ಗುಣಗಳನ್ನು ಹೇಳುವಾಗ ಹೆಣ್ಣು ಪಾತ್ರವಾದ ದ್ರೌಪದಿಯನ್ನು ಇಲ್ಲಿ ತರುವ ಪ್ರಮೇಯ ಅವನಿಗೆ ಕಂಡುಬರಲಿಲ್ಲ. **3ನೇ ಪುಟಕ್ಕೆ**



## ಸಂಪಾದಕೀಯ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ 35ನೇ ಸರ್ವ ಸದಸ್ಯರ ಸಭೆಯಲ್ಲಿ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿಯ ಹಿರಿಯ ಸದಸ್ಯರಾಗಿದ್ದ ಪ್ರೊ. ಅ.ರಾ.ಮಿತ್ರ, ಶ್ರೀ ಎಸ್.ವಿ.ಶ್ರೀನಿವಾಸರಾವ್, ಶ್ರೀಮತಿ ಜಯಮ್ಮ ಕರಿಯಣ್ಣ ಹಾಗೂ ಪ್ರೊ. ಟಿ.ಎಸ್. ನಾಗಭೂಷಣ, ಪ್ರೊ.ಜಿ ಅಶ್ವತ್ಥನಾರಾಯಣ ಶ್ರೀಮತಿ ಇಂದಿರಾ ಹೆಗಡೆ, ಶ್ರೀಮತಿ ಲಕ್ಷ್ಮಿ ಎನ್. ಮೂರ್ತಿ ಅವರುಗಳು ನಿಯಮಾನುಸಾರವಾಗಿ ನಿವೃತ್ತರಾದರು ಅವರೆಲ್ಲರೂ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಸಕ್ರಿಯರಾಗಿ ಭಾಗವಹಿಸಿ ಪ್ರತಿಷ್ಠಾನದ ಏಳಿಗೆಗಾಗಿ ಶ್ರಮಿಸಿರುತ್ತಾರೆ. ಶ್ರೀ ಎಸ್.ವಿ.ಶ್ರೀನಿವಾಸರಾವ್ ಅವರು ಸುಮಾರು ಏಳು ವರ್ಷಗಳ ಕಾಲ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿಯಾಗಿಯೂ ಶ್ರಮಿಸಿದ್ದು ಈ ಅವಧಿಯಲ್ಲಿ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಹಲವಾರು ಸಾಧನೆಗಳ ಅವರ ಪ್ರಮುಖ ಪಾತ್ರವಿತ್ತು. ಜೊತೆಗೆ ಅವರು ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ತ್ರೈಮಾಸಿಕ ವಾರ್ತಾಪತ್ರದ ಸಂಪಾದಕರಾಗಿದ್ದರು ಈ ಎಲ್ಲ ಮಹನೀಯರಿಗೆ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಅಭಾರಿಯಾಗಿರುತ್ತದೆ.

ಬೆಂಗಳೂರಿನಲ್ಲಿ ಬಹಳಷ್ಟು ಹವ್ಯಾಸಿ ಅನುವಾದಕರು, ವೃತ್ತಿ ನಿರತ ಅನುವಾದಕರು, ಉದಯೋನ್ಮುಖ ಬರಹಗಾರರಿಗೆ ಹಾಗೂ ಕನ್ನಡ ವಿದ್ಯಾರ್ಥಿಗಳಿಗೆ ಮೂಲಭೂತ ಸೌಲಭ್ಯಗಳ ಕೊರತೆ ಹಾಗೂ ಮಾರ್ಗದರ್ಶನದ ಕೊರತೆಗಳು ಇರುವುದನ್ನು ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಗುರುತಿಸಿ ಹವ್ಯಾಸಿ ಅನುವಾದಕರು, ವೃತ್ತಿ ನಿರತ ಅನುವಾದಕರು, ಉದಯೋನ್ಮುಖ ಬರಹಗಾರರು ಹಾಗೂ ಕನ್ನಡ ವಿದ್ಯಾರ್ಥಿಗಳಿಗೆ ಅನುಕೂಲಕ್ಕಾಗಿ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಒಂದು ಸೌಲಭ್ಯ ಕೇಂದ್ರವನ್ನು ಸ್ಥಾಪಿಸಲು ಉದ್ದೇಶಿಸಿತ್ತು. ಈ ಸೌಲಭ್ಯ ಕೇಂದ್ರದಲ್ಲಿ ಅನುವಾದ ಹಾಗೂ ಬರವಣಿಗೆಗಳನ್ನು ಮಾಡಿಕೊಳ್ಳುವ ಮೂಲಭೂತ ಸೌಲಭ್ಯವನ್ನು ಕಲ್ಪಿಸಿಕೊಟ್ಟು ಕೋರಿಕೆ ಮೇರೆಗೆ ಹಿರಿಯ ಸಾಹಿತಿಗಳ ಮಾರ್ಗದರ್ಶನವೂ ಲಭ್ಯಗೊಳಿಸುವ ಆಶಯವಿತ್ತು.ಈ ಸೌಲಭ್ಯವನ್ನು ಬಳಸಿಕೊಂಡು ಹವ್ಯಾಸಿ ಅನುವಾದಕರು, ವೃತ್ತಿ ನಿರತ ಅನುವಾದಕರು ಹಾಗೂ ಉದಯೋನ್ಮುಖ ಬರಹಗಾರರು ಹೆಚ್ಚಿನ ಗುಣಮಟ್ಟ ಸಾಧಿಸಲು ಸಾಧ್ಯ ಎಂಬ ನಂಬಿಕೆಯಿಂದ ಈ ಯೋಜನೆಯನ್ನು ರೂಪಿಸಲಾಗಿತ್ತು. ಈ ವಿಷಯವನ್ನು ಮಾಧ್ಯಮಗಳ ಮೂಲಕ ಹಾಗೂ ಸಗಟು ಕಿರು ಮಾಹಿತಿ ಸಂದೇಶಗಳನ್ನು ಸಂಚಾರಿ ದೂರವಾಣಿಗಳ ಮೂಲಕ ಪ್ರಚುರಪಡಿಸಲಾಯಿತು. ಅಂದರೆ ಹವ್ಯಾಸಿ ಅನುವಾದಕರು, ವೃತ್ತಿ ನಿರತ ಅನುವಾದಕರು, ಉದಯೋನ್ಮುಖ ಬರಹಗಾರರು ಹಾಗೂ ಕನ್ನಡ ವಿದ್ಯಾರ್ಥಿಗಳು ಪ್ರತಿಷ್ಠಾನದ ಗ್ರಂಥಾಲಯ ಹಾಗೂ ನಮ್ಮ ಪ್ರತಿಷ್ಠಾನದ ತನ್ನ ಎರಡನೇ ಮಹಡಿಯಲ್ಲಿ ಮೇಜು ಕುರ್ಚಿಗಳು, ಗಣಕ ಯಂತ್ರ, ಮುದ್ರಕ, ಛಾಯಾಗ್ರಾಹಕ(ಸ್ಕ್ಯಾನರ್), ಬೆರಳಚ್ಚುಗಾರ ಇವುಗಳನ್ನು ಒಳಗೊಂಡ ಮೂಲಭೂತ ಸೌಲಭ್ಯಗಳನ್ನು ಪ್ರತ್ಯೇಕವಾಗಿ ಹೊಂದಿಸಿಕೊಳ್ಳುವ ಬದಲಾಗಿ ನೇರವಾಗಿ ಬಳಸಿಕೊಂಡು ತಮ್ಮ ಕೆಲಸದಲ್ಲಿ ಹೆಚ್ಚಿನ ಪ್ರಮಾಣ ಹಾಗೂ ಗುಣಮಟ್ಟಗಳನ್ನು ಸಾಧಿಸಬಹುದು ನಮ್ಮ ನಿರೀಕ್ಷೆಯಿತ್ತು.

ಆದರೆ ಈ ಬಗ್ಗೆ ಹೆಚ್ಚು ಜನ ಪ್ರತಿಕ್ರಿಯಿಸಿರುವುದಿಲ್ಲ ಹಾಗೂ ಪ್ರತಿಕ್ರಿಯಿಸಿದ ಕೆಲವೇ ಜನರಿಗೆ ನಮ್ಮ ಆಶಯ ಅರ್ಥವಾಗಿಲ್ಲ. ಇದು ನಮಗೆ ಮಿಶ್ರ ಭಾವನೆಗಳನ್ನು ತಂದುಕೊಟ್ಟಿದೆ. ಒಂದು ಕಡೆಯಿಂದ ನಮ್ಮ ಆಶಯವನ್ನು ಬಹುತೇಕ ಸಾಹಿತ್ಯಾಸಕ್ತರು ಗುರುತಿಸಿರುವುದಿಲ್ಲ ಎಂದು ಖೇದವಾಗುತ್ತದೆ. ಆದರೆ ಇನ್ನೊಂದು ಕಡೆಯಿಂದ ನೋಡಿದರೆ ನಮ್ಮ ಕಲ್ಪನೆಯೇ ತಪ್ಪಿರಬಹುದು ಎಂದು ಅನಿಸುತ್ತದೆ. ಅಂದರೆ ಬಹುತೇಕವಾಗಿ ನಮ್ಮ ಉದ್ದೇಶಿತರಿಗೆ ಮೂಲಭೂತ ಸೌಲಭ್ಯಗಳ ಕೊರತೆ ಇರದಿರಬಹುದು ಎಂದು ಸಂತಸವಾಗುತ್ತದೆ.

ಈ ಹಿನ್ನಲೆಯಲ್ಲಿ ನಮ್ಮ ಈ ಪ್ರಸ್ತಾವಿತ ಯೋಜನೆಯನ್ನು ಕೈ ಬಿಟ್ಟಿದ್ದೇವೆ.

**ಬಿ. ಆರ್. ರವೀಂದ್ರನಾಥ್**
ಸಂಪಾದಕರು

| **ಜುಲೈ 2015ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು** |
|---|
| **ಶನಿವಾರ 11ನೇ ಜುಲೈ 2015**<br>ಅಕ್ಕರಗೊಟ್ಟಿ ಕಾರ್ಯಕ್ರಮ<br>ವಿಷಯ : ಕನ್ನಡ ಕಲಿಕೆ<br>ಚಾಲನೆ ನೀಡುವವರು: ಪ್ರೊ. ಜಿ. ಅಶ್ವತ್ಥನಾರಾಯಣ<br>ಸ್ಥಳ : ಪ್ರೊ. ಶಾ. ಬಾಲೂರಾವ್ ಮಾತಿನ ಮನೆ, |
| ಕನ್ನಡ ಸಂಸ್ಕೃತಿ ದರ್ಶನ ಸಾಕ್ಷ್ಯ ಚಿತ್ರ ಪ್ರದರ್ಶನ<br>**ಮಹಾ ಕವಿ ಪಂಪ**<br>**ಬುಧವಾರ 15ನೇ ಜುಲೈ2015 ಸಂಜೆ ಆರು ಗಂಟೆಗೆ** |
| ಶ್ರೀ ಸಿ.ಕೆ.ನಾಗರಾಜರಾವ್, ಪ್ರೊ.ಕೊರಟಿ ಶ್ರೀನಿವಾಸರಾವ್ ಹಾಗೂ ಪ್ರೊ. ಡಿ. ಲಿಂಗಯ್ಯ ದತ್ತಿ ನಿಧಿ ಕಾರ್ಯಕ್ರಮ<br>**ಗುರುವಾರ 23ನೇ ಜುಲೈ 2015 ಸಂಜೆ ಆರು ಗಂಟೆಗೆ**<br>ವಿಷಯ: **ಡಾ. ಗಿರೀಶ್ ಕಾರ್ನಾಡರ ನಾಟಕಗಳು**<br>ಉಪನ್ಯಾಸಕಾರರು: ಡಾ. ಅನ್ನದಾನೇಶ್<br>ಕನ್ನಡ ಪ್ರಾಧ್ಯಾಪಕರು, ಲಕ್ಷ್ಮಿ ಅಮ್ಮಣ್ಣಿ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು 560003 |
| **ವಚನ ವಿಹಾರ**<br>ಸಂಗೀತಾತ್ಮಕ ಸಾಕ್ಷ್ಯ ಚಿತ್ರ ಪ್ರದರ್ಶನ<br>**ಸೋಮವಾರ 27ನೇ ಜುಲೈ 2015 ಸಂಜೆ ಆರು ಗಂಟೆಗೆ** |

# ಶ್ರೀ ಗೋವಿಂದ ಜಾಲೀಹಾಳ ಭಕ್ತಿ ಗೀತೆಗಳ ಗಾಯನ ಸ್ಪರ್ಧೆ




ಭಾನುವಾರ 14ನೇ ಜೂನ್ 2015ರಂದು 13ರಿಂದ 18 ವರ್ಷ ವಯಸ್ಸಿನ ಯುವಜನರಿಗಾಗಿ ಭಕ್ತಿ ಗೀತೆಗಳ ಗಾಯನ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಭಾಗವಹಿಸಿದ ಎಲ್ಲಾ ಸ್ಪರ್ಧಿಗಳೂ ಸುಶ್ರಾವ್ಯವಾಗಿ ಭಕ್ತಿ ಗೀತೆಗಳನ್ನು ಹಾಡಿದರು.

ಈ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಕುಮಾರಿ ಅದಿತಿ ಬಿ ಪ್ರಹ್ಲಾದ್ ಪಡೆದರು ಹಾಗೂ ಎರಡನೇ ಬಹುಮಾನವನ್ನು ಕುಮಾರಿ ಅನಘ ಹೆಚ್.ಎ. ಪಡೆದರು. ಕುಮಾರಿ ಚಂದನ ಮುರಳೀಧರ ಮೂರನೇ ಬಹುಮಾನ ಪಡೆದರು. ಶ್ರೀಮತಿ ಆರ್. ನೀಲಾಂಬಿಕೆ ಹಾಗೂ ಕುಮಾರಿ ಅಪೂರ್ವ ಲಕ್ಷ್ಮಿ ತೀರ್ಪುಗಾರರಾಗಿದ್ದರು.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ.ಪಿ.ವಿ. ನಾರಾಯಣ ಅವರು ಬಹುಮಾನಗಳನ್ನು ವಿತರಿಸಿದರು.

---

**ಮೊದಲನೇ ಪುಟದಿಂದ**

**ಅಕ್ಕರಗೊಟ್ಟಿ ಕಾರ್ಯಕ್ರಮ**

ಮಹಾ ಭಾರತದ ಕಥೆಗೆ ಕೃಷ್ಣನೇ ಸೂತ್ರದಾರಿಯಾಗಿದ್ದರಿಂದ – ಅವನು ದೇವರಾಗಿದ್ದರಿಂದ – ಅವನ ಹೆಸರನ್ನು ಇಲ್ಲಿ ಪ್ರಸ್ತಾಪಿಸುವ ಅಗತ್ಯ ಅವನಿಗೆ ಕಂಡುಬರಲಿಲ್ಲ ಎಂದು ತಮ್ಮ ಅನಿಸಿಕೆಗಳನ್ನು ಮುಂದಿಟ್ಟರು. ಈ ಪದ್ಯದ ಬಗ್ಗೆ ಬಂದಿರುವ ಹತ್ತಾರು ವಿಮರ್ಶಾ ಕೃತಿ, ನೂರಾರು ಲೇಖನಗಳ ಸ್ವಾರಸ್ಯಕರ ಚರ್ಚೆಯ ವಿವರಗಳನ್ನು ಹಿರಿಯ ಸಂಸ್ಕೃತಿ ಚಿಂತಕರು, ನಿವೃತ್ತ ಪ್ರಾಧ್ಯಾಪಕರು ಪ್ರೊ. ಜಿ. ಅಶ್ವತ್ಥನಾರಾಯಣ ಅವರು ನೀಡಿದರು. ಪಂಪ ಕೃಷ್ಣನನ್ನು ಈ ಪದ್ಯದಲ್ಲಿ ಪ್ರಸ್ತಾಪಿಸದೆ ಇರಲು ಕಾರಣ ಆತ ದೇವರು, ಆತನಿಲ್ಲದೆ ಮಹಾಭಾರತ ನಡೆಯಲು ಸಾಧ್ಯವಿಲ್ಲ, ಮಾನವ ಪಾತ್ರಗಳ ಜೊತೆ ಅವನಿಗೇನು ಕೆಲಸ, ಪಂಪನ ಜೈನ ದೃಷ್ಟಿಯೂ ಇದಕ್ಕೆ ಕಾರಣ ಎಂಬಿವೇ ಮುಂತಾದ ವಿವರಗಳನ್ನೂ ಡಾ.ಕೆ.ಆರ್.ಗಣೇಶ್ ಅವರು, ಪ್ರೊ.ಕೆ.ಎಸ್. ಮಧುಸೂದನ ಅವರು ಅನಿಸಿಕೆ ವ್ಯಕ್ತಪಡಿಸಿದರು.

ಅರ್ಧ ದಿನ ಯುದ್ಧ ಮಾಡಿದ ಶಲ್ಯನಿಗೆ ಮಹಾಸ್ರಗ್ಧರಾ ವೃತ್ತದಲ್ಲಿ ಸ್ಥಳವಿದೆ. ಶ್ರೀ ಕೃಷ್ಣ ದ್ರೌಪದಿಯರನ್ನು ಪ್ರಸ್ತಾಪಿಸಲು ಸ್ಥಳವಿಲ್ಲವೇ? ಶಲ್ಯನ ಸ್ಥಳವನ್ನು ಇವರಿಗೆ ನೀಡಬಹುದಿತ್ತು ಎಂಬ ಅನಿಸಿಕೆಗಳು ವ್ಯಕ್ತವಾದವು. ಪಾತ್ರ ಚಿತ್ರಣದಲ್ಲಿಯೇ ಎಲಾ ಗುಣಗಳೂ ಮೌಲ್ಯಗಳೂ ವ್ಯಕ್ತವಾಗಿವೆ; ಅದಕ್ಕಾಗಿ ಪ್ರತ್ಯೇಕ ಪದ್ಯರಚನೆಯ ಅಗತ್ಯವಿರಲಿಲ್ಲ ಎಂದು ಪ್ರೊ.ಜಿ ಅಬ್ದುಲ್ ಬಷೀರ್ ಅವರು ಹೇಳಿದರು.

ಹೀಗಾಗಿ ಈ ಚರ್ಚೆಯು ತುಂಬ ಉಪಯುಕ್ತವಾಗಿ ಚಿಂತನೆಗಳ ಕಡೆತದಿಂದ ಹೊಸ ಆಲೋಚನೆಗಳಿಗೆ ಎಡೆಗೊಟ್ಟಿತು. ಚರ್ಚೆಯಲ್ಲಿ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ನಳಿನಿ ವೆಂಕಟೇಶ್, ಡಾ.ಜಯಮ್ಮ ಕರಿಯಣ್ಣ, ಡಾ.ಪಿ.ವಿ. ನಾರಾಯಣ ಮುಂತಾದವರು ಪಾಲ್ಗೊಂಡು ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದರು.

(‘ಅಕ್ಕರ ಗೊಟ್ಟಿ’ಯ ಜುಲೈ ತಿಂಗಳ ಕಾರ್ಯಕ್ರಮ 11–07–2015 ರಂದು ಸಂಜೆ 6–00 ಗಂಟೆಗೆ ‘ಶಾ, ಬಾಲೂರಾವ್ ಮಾತಿನ ಮನೆ’ಯಲ್ಲಿ)

# ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

## ಸಾಕ್ಷ್ಯಚಿತ್ರ ಪ್ರದರ್ಶನ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹೊಸ ಕಾರ್ಯಕ್ರಮವಾದ ಈ ಕಾರ್ಯಕ್ರಮದಲ್ಲಿ ಎರಡನೇ ಕಾರ್ಯಕ್ರಮವನ್ನು 18ನೇ ಜೂನ್ 2015 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಇತ್ತೀಚೆಗೆ ಅಳವಡಿಸಲಾಗಿರುವ ನೂತನ ಪ್ರೊಜೆಕ್ಟರ್ ಮೂಲಕ **"ಕವಿರಾಜ ಮಾರ್ಗ"**ಭಾಗ 1 ಮತ್ತು ಭಾಗ 2ವಿಡಿಯೋ ಚಿತ್ರಗಳನ್ನು ಪ್ರದರ್ಶಿಸಲಾಯಿತು. ಬಹು ಜನರಿಗೆ ಅಪರಿಚಿತವಾದ ಹಲವಾರು ಆಸಕ್ತಿದಾಯಕ ವಿಷಯಗಳನ್ನು ಒಳಗೊಂಡ ಈ ಸಾಕ್ಷ್ಯಚಿತ್ರವು, ಬಹು ಸಂಖ್ಯೆಯಲ್ಲಿ ಬಂದಿದ್ದ ಸಭಿಕರನ್ನು ಕನ್ನಡ ಭಾಷೆಯ ಇತಿಹಾಸದ ಬಗ್ಗೆ ತಿಳುವಳಿಕೆ ನೀಡಿತು..

## ಶ್ರೀಮತಿ ಜಯಲಕ್ಷಮ್ಮ ಬಾಪುರಾಮಣ್ಣ ದತ್ತಿ ನಿಧಿ ಕಾರ್ಯಕ್ರಮ

ಬುಧವಾರ 24ನೇ ಜೂನ್ 2015 ರಂದು ಹೆಸರಾಂತ ಕಲಾವಿದ ಹಾಗೂ ಕರ್ನಾಟಕ ಲಲಿತಕಲಾ ಅಕಾಡೆಮಿಯ ಮಾಜಿ ಅಧ್ಯಕ್ಷರಾಗಿದ್ದ ಶ್ರೀ ಚಿ. ಸು. ಕೃಷ್ಣಶೆಟ್ಟಿ ಅವರು ಲಲಿತಕಲೆಗಳ ನಡುವಿನ ಸಹ ಸಂಬಂಧ ಎಂಬ ವಿಷಯದ ಬಗ್ಗೆ ಉಪನ್ಯಾಸ ನೀಡಿದರು. ಈ ವಿಷಯದ ಬಗ್ಗೆ ಆಳವಾದ ಅಧ್ಯಯನ ನಡೆಸಿರುವ ಶ್ರೀ ಚಿ. ಸು.ಕೃಷ್ಣಶೆಟ್ಟಿ ಅವರು ಹಲವಾರು ಉದಾಹರಣೆಗಳ ಸಹಿತವಾಗಿ ವಿಷಯಮಂಡನೆ ಮಾಡಿದರು. ಸಾಹಿತ್ಯ, ಚಿತ್ರಕಲೆ. ವಾಸ್ತು ಶಿಲ್ಪ, ಸಂಗೀತ, ದೃಶ್ಯ ಮಾಧ್ಯಮ, ಧ್ವನಿ– ದೃಶ್ಯ ಮಾಧ್ಯಮ, ಛಾಯಾಚಿತ್ರಗ್ರಹಣ ಮುಂತಾದ ಪ್ರಕಾರಗಳಿಗೆ ಇರುವ ಅನುಕೂಲತೆಗಳು ಹಾಗೂ ಅವುಗಳ ವಿಶಿಷ್ಟತೆಗಳನ್ನು ಮನಮುಟ್ಟುವಂತೆ ತಿಳಿಸಿಕೊಟ್ಟರು. ಹಾಗೇಯೇ ನಮ್ಮ ದೇಶದವರ ದೃಷ್ಟಿಕೋಣಕ್ಕೂ ವಿದೇಶಿಯರ ದೃಷ್ಟಿಕೋಣಕ್ಕೂ ಇರುವ ವ್ಯತ್ಯಾಸಗಳ ಬಗ್ಗೆಯೂ ಬೆಳಕು ಚೆಲ್ಲಿದರು.



ಈ ದತ್ತಿ ನಿಧಿ ಸ್ಥಾಪಕರಾದ ಶ್ರೀಮತಿ ಜಯಲಕ್ಷ್ಮಮ್ಮ ಹಾಗೂ ಬಾಪುರಾಮಣ್ಣ ಅವರ ಪುತ್ರ ಶ್ರೀ ಬಾಪು ಸತ್ಯನಾರಾಯಣ ಅವರು ದತ್ತಿನಿಧಿ ಸ್ಥಾಪನೆಯ ಆಶಯವನ್ನು ವಿವರಿಸಿದರು. ಶ್ರೀ ಬಾಪು ಸತ್ಯನಾರಾಯಣ ಹಾಗೂ ಅವರ ಕುಟುಂಬ



ವರ್ಗದವರು ಉಪಸ್ಥಿತರಿದ್ದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ.ಪಿ.ವಿ. ನಾರಾಯಣ ಅಧ್ಯಕ್ಷತೆ ವಹಿಸಿದ್ದರು. ಗೌರವ ಕಾರ್ಯದರ್ಶಿ ಶ್ರೀ ರವೀಂದ್ರನಾಥ್ ಸ್ವಾಗತ ಕೋರಿದರು.

ದಿನಾಂಕ 25–06–2015ರಂದು ಇದೇ ದತ್ತಿ ನಿಧಿಯಡಿಯಲ್ಲಿ **"ಕುಂತಿ–ಕರ್ಣ"** ಗಮಕ ರೂಪಕ (ವೇಷ ಭೂಷಣ ಸಹಿತ) ಕಾರ್ಯಕ್ರಮವನ್ನು ಶ್ರೀಮತಿ ಪದ್ಮಾ ಗುರುದತ್ ಮತ್ತು ತಂಡದವರು ನಡೆಸಿಕೊಟ್ಟರು. ಈ ಗಮಕ ರೂಪಕದಲ್ಲಿ ಶ್ರೀಮತಿ ಪದ್ಮಾ ಗುರುದತ್ ಅವರನ್ನೂ ಒಳಗೊಂಡಂತೆ ವಿವಿಧ ಪಾತ್ರಗಳನ್ನು ವಹಿಸಿದ ಎಲ್ಲಾ ಪಾತ್ರಧಾರಿಗಳ ಬಹಳ ಪರಿಣಾಮಕಾರಿ ನಟನೆ ಹೆಚ್ಚಿನ ಸಂಖ್ಯೆಯಲ್ಲಿ ನೆರೆದಿದ್ದ ಪ್ರೇಕ್ಷಕರನ್ನು ರಂಜಿಸಿತು. ಹಿನ್ನಲೆ ಸಂಗೀತ ಹಾಗೂ ನಟನೆ ಎಲ್ಲರ ಮನಸೂರೆಗೊಂಡಿತು.

## ವಚನ ವಿಹಾರ
## ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ

29ನೇ ಜೂನ್ 2015ರಂದು ಮೊದಲ ವಚನ ವಿಹಾರ – ವಚನಗಳ ಗಾಯನ ಮತ್ತು ವ್ಯಾಖ್ಯಾನಗಳನ್ನು ಒಳಗೊಂಡಿರುವ ವಿಡಿಯೋ ಚಿತ್ರಗಳ ಪ್ರದರ್ಶನ ನಡೆಯಿತು. ಸುಮಾರು ಒಂದು ಗಂಟೆಯ ಈ ಕಾರ್ಯಕ್ರಮದಲ್ಲಿವಚನ ಚಳುವಳಿಯ ಪ್ರಾರಂಭ ಹಾಗೂ ಸ್ವರೂಪಗಳ ಬಗ್ಗೆ ಬಹಳ ರಸವತ್ತಾಗಿ ವಿವರಿಸಲಾಗಿದ್ದು ಸಭಿಕರಿಗೆ ಹೊಸ ಅನುಭವವನ್ನು ತಂದುಕೊಟ್ಟಿತು.

## ಸಾಕ್ಷ್ಯ ಚಿತ್ರ ಪ್ರದರ್ಶನ ಕಾರ್ಯಕ್ರಮಗಳು

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಇತ್ತೀಚೆಗೆ ನೂತನ ಪ್ರೊಜೆಕ್ಟರ್ ನ್ನು ಅಳವಡಿಸಿದ್ದು, ಇನ್ನು ಮುಂದೆ ಪ್ರತಿ ತಿಂಗಳೂ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯ ಬಗ್ಗೆ ಕರ್ನಾಟಕ ವಾರ್ತಾ ಇಲಾಖೆ ಹಾಗೂ ಇತರ ಸಂಸ್ಥೆಗಳು ನಿರ್ಮಾಣ ಮಾಡಿರುವ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶನ ಮಾಡಲಾಗುವುದು. ಸಾಹಿತ್ಯಾಸಕ್ತರು ಈ ಸಾಕ್ಷ್ಯ ಚಿತ್ರ ಪ್ರದರ್ಶನ ಕಾರ್ಯಕ್ರಮಗಳಲ್ಲಿ ಉಪಸ್ಥಿತರಿರಬೇಕೆಂದು ಕೋರುತ್ತೇವೆ.

# ಸರ್ವ ಸದಸ್ಯರ ಸಭೆ

ದಿನಾಂಕ 21–06–2015 ರಂದು ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಎಂವಿಸೀ ಸಭಾಂಗಣದಲ್ಲಿ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ 35ನೇ ಸರ್ವ ಸದಸ್ಯರ ಸಭೆ ನಡೆಯಿತು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ಷಿಕ ವರದಿ, ಆಯವ್ಯಯ ಲೆಕ್ಕ ಇತ್ಯಾದಿ ವಿಷಯಗಳ ಬಗ್ಗೆ ಚರ್ಚೆಗಳನ್ನು ನಡೆಸಿ ಅನುಮೋದಿಸಲಾಯಿತು.



ಈ ವರ್ಷದ ಸರ್ವ ಸದಸ್ಯರ ಸಭೆಯಲ್ಲಿ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಸದಸ್ಯರಾದ ಪ್ರೊ. ಅ.ರಾ.ಮಿತ್ರ, ಶ್ರೀ ಎಸ್.ವಿ.ಶ್ರೀನಿವಾಸರಾವ್, ಶ್ರೀಮತಿ ಜಯಮ್ಮ ಕರಿಯಣ್ಣ ಹಾಗೂ ಪ್ರೊ. ಟಿ.ಎಸ್. ನಾಗಭೂಷಣ ನಿಯಮಾನುಸಾರವಾಗಿ ನಿವೃತ್ತರಾದರು. ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಹಲವಾರು ವರ್ಷಗಳ ಕಾಲ ಸೇವೆ ಸಲ್ಲಿಸಿದ ಇವರುಗಳಿಗೆ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಅಭಾರಿಯಾಗಿರುತ್ತದೆ. ನಿವೃತ್ತರಾದ ಸ್ಥಾನಗಳಿಗೆ ಶ್ರೀ ವೈ ಎನ್. ಶರ್ಮಾ, ಶ್ರೀ ಎಸ್.ವಿ, ಶ್ರೀನಿವಾಸಮೂರ್ತಿ, ಡಾ. ನಂಜುಂಡ ಸ್ವಾಮಿ ಹಾಗೂ ಶ್ರೀಮತಿ ಎಂ.ಕೆ. ರಮಾದೇವಿ ಅವರುಗಳು 2015ರಿಂದ 2018ರ ವರೆಗಿನ ಅವಧಿಗೆ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಅವಿರೋಧವಾಗಿ ಆಯ್ಕೆಯಾದರು. ಹೊಸದಾಗಿ ಆಯ್ಕೆಯಾದ ಕಾರ್ಯಕಾರಿ ಸಮಿತಿ ಸದಸ್ಯರಿಗೆ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಸ್ವಾಗತವನ್ನು ಬಯಸಿ ಅವರ ಜ್ಞಾನ, ಅನುಭವ ಹಾಗೂ ಸಂಪರ್ಕಗಳಿಂದ ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ ಇನ್ನೂ ಎತ್ತರಕ್ಕೆ ಬೆಳೆಯುತ್ತದೆ ಎಂಬ ವಿಶ್ವಾಸ ನಮಗಿದೆ.

**ಹೊಸದಾಗಿ ಆಯ್ಕೆಯಾದ ಕಾರ್ಯಕಾರಿ ಸಮಿತಿ ಸದಸ್ಯರ ಕಿರುಪರಿಚಯ**



**ಶ್ರೀ ವೈ ಎನ್. ಶರ್ಮಾ**

ವೃತ್ತಿ : ಆಡಿಟರ್

ಇತರ ಚಟುವಟಿಕೆಗಳು:

ಈಗ : ಕಾರ್ಯದರ್ಶಿ, ಶ್ರೀ ಶಾರದಾ ವಿದ್ಯಾನಿಕೇತನ, ಕಾರ್ಯದರ್ಶಿ, ಅಖಿಲ ಕರ್ನಾಟಕ ಮುಲಕನಾಡು ಸಂಘ,

ಈ ಹಿಂದೆ: ಜಂಟಿ ಕಾರ್ಯದರ್ಶಿ, ಅಖಿಲ ಕರ್ನಾಟಕ ಬ್ರಾಹ್ಮಣ ಮಹಾಸಭಾ

ಕಾರ್ಯದರ್ಶಿ, ಕರ್ನಾಟಕ ತೆರಿಗೆ ಸಲಹೆಗಾರರ ಸಂಘ

**ಶ್ರೀ ಎಸ್.ವಿ. ಶ್ರೀನಿವಾಸಮೂರ್ತಿ**



ವೃತ್ತಿ : ವಕೀಲರು

ಇತರ ಚಟುವಟಿಕೆಗಳು:

ಈಗ: ಕಾರ್ಯದರ್ಶಿ, ಹೆಚ್. ಎಸ್.ಆರ್. ಲಾ ಮತ್ತು ಸೋಶಿಯಲ್ ಫೌಂಡೇಷನ್, ಸಂಯೋಜಕರು, ಗಾಂಧಿ ವಿಚಾರ ಪ್ರಚಾರ ವಿಭಾಗ, ಧರ್ಮದರ್ಶಿ, ಎಂವಿಆರ್ ಫೌಂಡೇಷನ್

ಈ ಹಿಂದೆ: ಮಹಾ ಕಾರ್ಯದರ್ಶಿ, ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ, ಕರ್ನಾಟಕ, ಅಧ್ಯಕ್ಷರು, ಲಹರಿ ವಕೀಲರ ವೇದಿಕೆ, ಮಹಾ ಕಾರ್ಯದರ್ಶಿ, ಐಎಸ್ ಬಿಟಿ ಐ, ಕರ್ನಾಟಕ

**ಡಾ. ನಂಜುಂಡ ಸ್ವಾಮಿ**



**ಆಯುರ್ವೇದ ಡಾಕ್ಟರ್ ಹಾಗೂ ಲೇಖಕರು**

**ಶ್ರೀಮತಿ ಎಂ.ಕೆ. ರಮಾದೇವಿ**



**ನಿವೃತ್ತ ಮುಖ್ಯೋಪಧ್ಯಾಯಿನಿ, ಬರಹಗಾರ್ತಿ.**

**ಇತರ ಚಟುವಟಿಕೆಗಳು: ಕಾರ್ಯಕಾರಿ ಸಮಿತಿ ಸದಸ್ಯೆ, ಹಿರಿಯ ನಾಗರೀಕರ ಸಂಘಗಳ ಒಕ್ಕೂಟ**

**ಶಾಶ್ವತ ನಿಧಿ**

**ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ**

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ , ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದುಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ.

ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ.ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ.ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ.

ತಮ್ಮಲ್ಲಿ ವಿಶೇಷವಾಗಿ ಮಾಡುವ ಮನವಿಯೆಂದರೆ, ತಾವು ಉದಾರವಾಗಿ ದಾನದ ರೂಪದಲ್ಲಿ ನಮ್ಮ ಸಂಸ್ಥೆಗೆ ಧನಸಹಾಯ ಮಾಡಬೇಕೆಂದು ತಮ್ಮನ್ನು ಕೋರುತ್ತೇವೆ. ತಮ್ಮಂತಹವರು ನಮ್ಮ ಚಟುವಟಿಕೆಗಳಿಗೆ ಬೆಂಬಲ ನೀಡಿದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತಷ್ಟು ಶ್ರೀಮಂತವಾಗಲು ಸಾಧ್ಯವಾಗಬಹುದಾಗಿರುತ್ತದೆ.

ತಾವು ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ, ಶಾಶ್ವತ ನಿಧಿಗೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳನ್ನು ಖರೀದಿಸುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳ ಪ್ರಾಯೋಜಕತ್ವವನ್ನು ವಹಿಸಿಕೊಳ್ಳುವುದರ ಮೂಲಕ ಹಲವು ವಿಧಗಳಲ್ಲಿ ನಮ್ಮ ಜೊತೆ ಕೈ ಜೋಡಿಸಬಹುದಾಗಿರುತ್ತದೆ.

ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜಿ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.

ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.

ಶಾಶ್ವತ ನಿಧಿಗೆ ಜೂನ್ 2015 ರಲ್ಲಿ ಕಾಣಿಕೆ ನೀಡಿರುವವರ ಪಟ್ಟಿ:

ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯ, ಪ್ರೊ. ಕೆ.ಎನ್. ಭಗವಾನ್ ಹಾಗೂ ಶ್ರೀ ಗುರುಪ್ರಸಾದ್

ಇಲ್ಲಿಯವರೆಗೆ ಸಂಗ್ರಹಿಸಲಾದ ಮೊತ್ತ ರೂ. 13.85 ಲಕ್ಷ

---

## ಸದಸ್ಯರ ಗಮನಕ್ಕೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಎಲ್ಲಾ ಸದಸ್ಯರ ವಿಳಾಸಗಳನ್ನು ಖಚಿತಪಡಿಸಿಕೊಂಡು ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ಪರಿಷ್ಕೃತ ವಿಳಾಸ ಮಾಹಿತಿಗಳನ್ನು ಡಿಜಿಟಲೀಕರಿಸುವ ಕೆಲಸವನ್ನು ಪ್ರಾರಂಭ ಮಾಡಿರುತ್ತದೆ. ಇದರಿಂದ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಹೆಚ್ಚಿನ ದಕ್ಷತೆ ಹಾಗೂ ಮಿತವ್ಯಯ ಸಾಧಿಸಲು ಸಾಧ್ಯವಿರುತ್ತದೆ. ಪ್ರತಿಷ್ಠಾನದ ಎಲ್ಲಾ ಸದಸ್ಯರೂ ತಮ್ಮ ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ವಿಳಾಸಗಳನ್ನು ಪ್ರತಿಷ್ಠಾನದ ಕಚೇರಿಗೆ ಈ ಕೆಳಕಂಡ ಯಾವುದೇ ರೀತಿಯಲ್ಲಿ ತಲುಪಿಸಬೇಕೆಂದು ಕೋರುತ್ತೇವೆ:

1. ಒಂದು ಪೋಸ್ಟ್ ಕಾರ್ಡ್ ನಲ್ಲಿ ಎಲ್ಲಾ ವಿವರಗಳನ್ನು ಬರೆದು ಕಳುಹಿಸುವುದು
2. ಪ್ರತಿಷ್ಠಾನದ ಈ ಮೈಲ್ ವಿಳಾಸಕ್ಕೆ ಎಲ್ಲಾ ವಿವರಗಳನ್ನು ಕಳುಹಿಸುವುದುಛಟಡುಣಡಿಞಣ@ರಟಚುಟ.ಛಿರಟ
3. ಪ್ರತಿಷ್ಠಾನದ ಕಚೇರಿಗೆ ದೂರವಾಣಿ ಕರೆ ಮಾಡಿ ವಿವರಗಳನ್ನು ನೀಡುವುದು 080 26615877
4. ಪ್ರತಿಷ್ಠಾನದ ಕಚೇರಿಗೆ ಭೇಟಿ ನೀಡಿದಾಗ ವಿವರಗಳನ್ನು ನೀಡುವುದು

ದಯವಿಟ್ಟು ಗಮನಿಸಿ: ಹಾಲಿ ನಿಯಮಗಳ ಪ್ರಕಾರ ಸದಸ್ಯತ್ವ ಗುರುತಿನ ಕಾರ್ಡ್ ಇಲ್ಲದೇ ಪ್ರತಿಷ್ಠಾನದ ಸರ್ವ ಸದಸ್ಯರ ಸಭೆಯ ಕಲಾಪಗಳಲ್ಲಿ ಭಾಗವಹಿಸಲು ಅನುಮತಿ ಇರುವುದಿಲ್ಲ. ಆದ್ದರಿಂದ ಪ್ರತಿಷ್ಠಾನದ ಸದಸ್ಯತ್ವದ ಗುರುತಿನ ಕಾರ್ಡ್ ನ್ನು ಪಡೆಯ ದಿರುವಂತಹ ಸದಸ್ಯರು ಶೀಘ್ರವಾಗಿ ಪಡೆದುಕೊಳ್ಳಬೇಕೆಂದು ಕೋರಲಾಗಿದೆ.

**ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳು ಈಗ ಯೂ ಟ್ಯೂಬ್ ನಲ್ಲಿ ಲಭ್ಯ**

ಸದಸ್ಯರು ಹಾಗೂ ವಿಶ್ವದಾದ್ಯಂತ ಇರುವ ಪ್ರತಿಷ್ಠಾನದ ಅಭಿಮಾನಿಗಳ ಅನುಕೂಲಕ್ಕಾಗಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳ ಧ್ವನಿ ಮುದ್ರಿತ ಉಪನ್ಯಾಸಗಳು ಹಾಗೂ ವಿಡಿಯೋಗಳನ್ನು ಜನಪ್ರಿಯ ಯೂ ಟ್ಯೂಬ್ ನಲ್ಲಿ ಅಳವಡಿಸಲಾಗಿದೆ. ಇವುಗಳನ್ನು ತಲುಪಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ www.bmshri.orgಗೆ ಭೇಟಿ ನೀಡಿ.

# ಪ್ರತಿಷ್ಠಾನದ ಹೊಸ ನಿಯತ ಕಾರ್ಯಕ್ರಮ

# 'ಅಕ್ಕರ ಗೊಟ್ಟಿ'

**ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ**
**ಸ್ಥಳ : ಶಾ. ಬಾಲೂರಾವ್ ಮಾತಿನ ಮನೆ**
**ಎರಡನೆಯ ಮಹಡಿ, ಬಿಎಂಶ್ರೀ ಪ್ರತಿಷ್ಠಾನ**

**ಕಾರ್ಯಕ್ರಮದ ಸ್ವರೂಪ:**

1. ಇದು ಉಪನ್ಯಾಸ ಕಾರ್ಯಕ್ರಮವಲ್ಲ; ಪ್ರತಿಷ್ಠಾನವು ಯಾರನ್ನೂ ಅತಿಥಿಯಾಗಿ ಆಹ್ವಾನಿಸುವುದಿಲ್ಲ.
2. ಸಂಸ್ಕೃತಿಗೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ಒಬ್ಬರು ಆಸಕ್ತರು ತಾವಾಗಿ ಹತ್ತು–ಹದಿನೈದು ನಿಮಿಷಗಳಲ್ಲಿ ತಮ್ಮ ವಿಚಾರವನ್ನು ಮಂಡಿಸುತ್ತಾರೆ: ಅದರ ವಿಷಯವಾಗಿ ಒಂದು ಗಂಟೆಯವರೆಗೂ ಚರ್ಚೆ ಮುಂದುವರಿಯುತ್ತದೆ; ಚರ್ಚೆಯಲ್ಲಿ ಆಸಕ್ತರಾದ ಯಾರು ಬೇಕಾದರೂ ಭಾಗವಹಿಸಬಹುದು.
3. ಯಾರು ಬೇಕಾದರೂ ತಮಗೆ ಸೂಕ್ತವೆನಿಸಿದ ವಿಷಯವನ್ನು ಚರ್ಚೆಗೆ ಮಂಡಿಸಬಹುದು; ಆದರೆ ಕನಿಷ್ಠ ಒಂದು ತಿಂಗಳ ಮುಂಚೆ ವಿಷಯವನ್ನು ಪ್ರತಿಷ್ಠಾನದ ಕಾರ್ಯದರ್ಶಿಗಳಿಗೆ ತಿಳಿಸಬೇಕು. ಚರ್ಚೆಯಲ್ಲಿ ಪಾಲುಗೊಳ್ಳುವವರಿಗಾಗಿ ಪ್ರತಿಷ್ಠಾನದ ಸೂಚನಾ ಫಲಕದಲ್ಲಿ ಹಾಗೂ ಪ್ರತಿ ತಿಂಗಳ ಮೊದಲಲ್ಲಿ ಪ್ರಕಟವಾಗುವ ವಾರ್ತಾಪತ್ರ 'ಹೊಂಗನಸು'ವಿನಲ್ಲಿ ತಿಳಿಯಪಡಿಸಲಾಗುವುದು
4. ಚರ್ಚೆಗೆ ಆರಿಸಿಕೊಳ್ಳುವ ವಿಷಯ ಸಂಸ್ಕೃತಿಗೆ ಸಂಬಂಧಿಸಿದ ಯಾವುದೇ ಆಗಿರಬಹುದು: ಸಾಹಿತ್ಯ, ಶಾಸನ, ಕಲೆ, ಸಿನಿಮ, ಸಂಗೀತ, ಇತಿಹಾಸ, ಮಾನವಿಕ – ಹೀಗೆ. ಗೊಟ್ಟಿಯಲ್ಲಿ ನಡೆಯುವ ಚರ್ಚೆಯನ್ನು ಧ್ವನಿಮುದ್ರಿಸಿಕೊಂಡು ಯೂಟ್ಯೂಬ್‌ನಲ್ಲಿಯೂ ಹಾಕಲಾಗುವುದು.
5. ಪ್ರತಿ ತಿಂಗಳೂ ಎರಡನೆಯ ಶನಿವಾರ ಸಂಜೆ 6–00 ಗಂಟೆಗೆ ಕಾರ್ಯಕ್ರಮ ಆರಂಭ




ಬಿಎಂಶ್ರೀ ಯವರ ಮೊಮ್ಮಗಳು ಶ್ರೀಮತಿ ಕಮಲಿನಿ ಶಾ ಬಾಲೂರಾವ್ ರವರು ನೀಡಿದ ದಾನದ ಮೊತ್ತದಿಂದ ಬಿಎಂಶ್ರೀ ಪ್ರತಿಷ್ಠಾನದ ಎರಡನೆಯ ಮಹಡಿಯಲ್ಲಿ "ಶಾ. ಬಾಲೂರಾವ್ ಮಾತಿನ ಮನೆ" ಯನ್ನು ಸ್ಥಾಪಿಸಲಾಗಿದೆ.

ಈ ಸಭಾಂಗಣದಲ್ಲಿ ಸಾಹಿತ್ಯಾಸಕ್ತರು ಔಪಚಾರಿಕ ಹಾಗೂ ಅನೌಪಚಾರಿಕ ಚರ್ಚೆಗಳನ್ನು ನಡೆಸಿ ಕನ್ನಡ ಸಾಹಿತ್ಯದಲ್ಲಿ ಹೊಸತನವನ್ನು ಕಾಣುವ ಹಾಗೂ ಹೊಸತನವನ್ನು ತರುವ ಪ್ರಯತ್ನಗಳನ್ನು ಮಾಡುವ ಕೆಲಸ ಆಗಬೇಕೆಂದು ಆಶಯವಿದೆ. ಬಿಎಂಶ್ರೀ ಪ್ರತಿಷ್ಠಾನವು ಈ ನಿಟ್ಟಿನಲ್ಲಿ ಹೆಜ್ಜೆಯನ್ನಿಟ್ಟು ಹೊಸ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುತ್ತದೆ. **ಕನ್ನಡ ಪರ ಸಂಘ ಸಂಸ್ಥೆಗಳು ಹಾಗೂ ಸಾಹಿತ್ಯಾಸಕ್ತರು ಸಾಹಿತ್ಯ ಸಂಬಂಧಿತ ಚಟುವಟಿಕೆಗಳನ್ನು ನಡೆಸಲು ಈ ಸಭಾಂಗಣವನ್ನು ಬಹು ಸುಲಭ ದರಗಳಲ್ಲಿ ಪಡೆಯಬಹುದಾಗಿರುತ್ತದೆ. ಸುಮಾರು 50 ಜನರು ಕುಳಿತು ಚರ್ಚೆ ನಡೆಸಬಹುದಾಗಿರುತ್ತದೆ. ಇತರ ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಿರಿ.**

---

## ಹಸ್ತಪ್ರತಿ ವಿಭಾಗ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗವು ಸತತವಾಗಿ ಕಾರ್ಯನಿರತವಾಗಿರುತ್ತದೆ. ನಮ್ಮಲ್ಲಿರುವ ಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. 2015ರ ಜೂನ್ ತಿಂಗಳಿನಲ್ಲಿ 12 ಗ್ರಂಥಗಳ ಶುಷ್ಕ ಶುದ್ಧೀಕರಣ, 10 ಗ್ರಂಥಗಳಿಗೆ ತೈಲ ಲೇಪನ ಮತ್ತು ಮಸಿ ಲೇಪನ, 8 ಗ್ರಂಥಗಳಲ್ಲಿ ಪತ್ರಗಳ ಜೋಡಣೆ, ಸ್ಕಾನ್ ಮಾಡಲು ಸಿದ್ಧಪಡಿಸಿರುವುದು , 23 ಗ್ರಂಥಗಳಿಗೆ ಸೂಚಿಗಳನ್ನು ತಯಾರಿಸಿರುವುದು, 2 ಗ್ರಂಥಗಳಿಗೆ ಅಟ್ಟೆ ಕಟ್ಟಿರುವುದು ಮತ್ತು 13 ಗ್ರಂಥಗಳಿಗೆ ಬಟ್ಟೆ ಕಟ್ಟಿರುವುದು ಈ ಎಲ್ಲಾ ಕೆಲಸಗಳನ್ನು ಮಾಡಿರಲಾಗಿರುತ್ತದೆ. 2015ರ ಜೂನ್ ತಿಂಗಳಿನಲ್ಲಿ 4 ಗ್ರಂಥಗಳನ್ನು ಪ್ರತಿಷ್ಠಾನವು ಸ್ವೀಕರಿಸಿರುತ್ತದೆ. ಇಬ್ಬರು ಸಿಬ್ಬಂದಿಗಳು ಹಾಗೂ ಕೆಲ ಸ್ವಯಂಪ್ರೇರಿತರ ಶ್ರಮದಿಂದ ಈ ಚಟುವಟಿಕೆಗಳನ್ನು ಸಾಧಿಸಲಾಗಿದೆ. ಮಾನ್ಯ ಸದಸ್ಯರಿಗೆ ತಿಳಿದಿರಬಹುದಾದಂತೆ ಹಸ್ತಪ್ರತಿಗಳಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ಅತ್ಯುತ್ತಮ ರೀತಿಯಲ್ಲಿ ನಡೆಸುತ್ತಿರುವ ಸಂಸ್ಥೆಗಳ ಪೈಕಿ ನಮ್ಮ ಪ್ರತಿಷ್ಠಾನ ಒಂದು ಪ್ರಮುಖ ಸಂಸ್ಥೆಯಾಗಿರುತ್ತದೆ.

**Regd. with RNI, New Delhi. KARKAN 24541 dated 08.12.2014**

## ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನವು ಪ್ರಕಟಿಸಿರುವ ಪುಸ್ತಕಗಳ ಕಿರು ಪರಿಚಯ

**ಹಸ್ತಪ್ರತಿ ಶಾಸ್ತ್ರಜ್ಞ ಎಸ್. ಶಿವಣ್ಣ**

**(ಸಾಹಿತಿ ವಿದ್ವಾಂಸರ ಕಿರು ಪುಸ್ತಕ ಮಾಲೆ –1)**

ಪು. 64 ಬೆಲೆ ರೂ 30/– 2012

ಆಕರ ವಿಜ್ಞಾನಿ ಎಂದು ವಿದ್ವಾಂಸರಲ್ಲಿ ಪ್ರಸಿದ್ಧ ವಾಗಿರುವ ಶಿವಣ್ಣನವರು ಯಾವಾಗಲೂ ಮಠ ಮಾನ್ಯಗಳು, ವಿಶ್ವವಿದ್ಯಾಲಯಗಳನ್ನು ಸುತ್ತುತ್ತಾ, ಹಸ್ತ ಪ್ರತಿ ಪರಿಶೀಲಿಸುತ್ತ ಹೊಸಹೊಸ ಅನ್ವೇಷಣೆ ಮಾಡಿದವರು ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗವನ್ನು ಕಟ್ಟಿ ಬಳಸಿದವರು ಹಸ್ತ ಪ್ರತಿ ಸೂಚಿಗಳು, ವಚನ ಸಂಕಲನಗಳು, ಸ್ವರ ವಚನಗಳು, ಟೀಕಾ ಸಾಹಿತ್ಯ, ಹೀಗೆ ವೈವಿಧ್ಯಮಯ ವೈಶಿಷ್ಟಮಯ 45 ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ್ದಾರೆ. ಶಿವಣ್ಣನವರ ಜೀವನ ಸಾಧನೆಯ ಬಗೆಗೆ ಪ್ರಸ್ತುತ ಕೃತಿ ಪೂರಕವಾಗಿದೆ.ಇದರಲ್ಲಿರುವ ಕೃತಿಗಳ ಸೂಚಿ ಸಾಹಿತ್ಯ, ಶಿವಣ್ಣನವರು ಸಂಪಾದಿಸಿದ ಕೃತಿಗಳ ಸವಿವರಗಳು ಅತ್ಯಮೂಲ್ಯ ಆಕರ ಸಂಪನ್ಮೂಲಗಳಾಗಿವೆ.

ಶ್ರೀಕಂಠಯ್ಯ (ಬಿ. ಎಂ) [ಶ್ರೀ ಕಾವ್ಯನಾಮ]

**ಇಂಗ್ಲಿಷ್ ಗೀತೆಗಳು : ಮೂಲ ಆಂಗ್ಲ ಕವನಗಳೊಂದಿಗೆ (ತೃತೀಯ ಮುದ್ರಣ)**

[**ಪ್ರಥಮ 1985, ದ್ವಿತೀಯ** 2006]

ಪು.xvi+192 ಬೆಲೆ ರೂ. 100/– 2013

19ನೇ ಶತಮಾನದ ಉತ್ತರ ಭಾಗದಲ್ಲಿ ಇಂಗ್ಲಿಷ್ ಸಾಹಿತ್ಯದ ಪರಿಚಯ ಲಾಭವನ್ನು ಪಡೆದ ಸಾಹಿತಿಗಳು ಜಡಗಟ್ಟಿನ ಸಂಪ್ರದಾಯ ಮಾರ್ಗವನ್ನು ತೊರೆದು ಹೊಸ ಮಾರ್ಗದಲ್ಲಿ ಕಾವ್ಯ ರಚನೆ ಮಾಡಬೇಕು, ಮಾಡಿಸಬೇಕು ಎಂಬ ಉತ್ಕಟವಾದ ಪ್ರೇರಣೆ ಹೊಂದಿದ್ದರು.'ಶ್ರೀ' ಯವರು ಇದೇ ಪಂಕ್ತಿಗೆ ಸೇರಿದವರು, 'ಇಂಗ್ಲಿಷ್ ಗೀತೆಗಳು'ಸಂಕಲನವನ್ನು 1926ರಲ್ಲಿಹೊರತಂದರು, ಹೆಸರುಭಾವ ಮುಂತಾದವು ಕನ್ನಡತನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಾಗಿದ್ದರೂ, ಪದಪ್ರಯೋಗ, ಶೈಲಿ, ಛಂದಸ್ಸು, ಭಾವರಸಲು.... ಮೂಲ ಕವಿಯ ವ್ಯಕ್ತಿತ್ವವನ್ನು ಅನುಸರಿಸಿದೆ. 'ಶ್ರೀ' ಯವರಮನಸ್ಸಿಗೆ ಒಪ್ಪಿಬಂದ ಇಂಗ್ಲಿಷ್ ಕವಿತೆಗಳನ್ನು ಆಯ್ಕೆಮಾಡಿ ಕನ್ನಡೀಕರಿಸಲಾಗಿತ್ತು.ಪ್ರಸ್ತುತಸಂಕಲನದಲ್ಲಿ 60 ಅನುವಾದಿನದ ಕನ್ನಡ ಕತೆಗಳಿದ್ದು ಹಾಗೂ ಅವುಗಳ ಇಂಗ್ಲಿಷ್ ಮೂಲ ರೂಪವನ್ನೂ ಒದಗಿಸಲಾಗಿದೆ.ಇದು ಕನ್ನಡ ನವೋದಯ ಕಾವ್ಯದ ಆಚಾರ್ಯ ಕೃತಿ.

ಶ್ರೀಟಿವಾಸರಾವ್ (ಎಸ್.ವಿ)

**ಬೆಟಗೇರಿ ಕೃಷ್ಣ ಶರ್ಮ : ಜೀವನ ಪರಿಚಯ**

**(ಸಾಹಿತಿ ವಿದ್ವಾಂಸರ ಕಿರು ಪುಸ್ತಕ ಮಾಲೆ  2)**

ಪು.ಎತ+44 ಬೆಲೆ ರೂ. 20/– 2012

ಕನ್ನಡ ನವೋದಯ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ವಿಫುಲವಾಗಿ ಕೃಷಿ ಮಾಡಿ ಕನ್ನಡ ಸಾರಕ್ಷತ ಲೋಕವನ್ನು ಶ್ರೀಮಂತಗೊಳಿಸಿದ ಗಣ್ಯರಲ್ಲಿ ಬೆಟಗೇರಿ ಕೃಷ್ಣ ಶರ್ಮರು ಅಗ್ರ ಪಂಕ್ತಿಗೆ ಸೇರುತ್ತಾರೆ. 'ಆನಂದಕಂದ' ಇವರ ಕಾವ್ಯನಾಮ, ಕೃಷ್ಣಶರ್ಮರ ಜೀವನವೃತ್ತಾಂತವನ್ನು ಸರಳಭಾಷೆಯಲ್ಲಿ ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ. ಅಂತ್ಯಭಾಗದಲ್ಲಿ ಡಾ.ಎಸ್. ಆರ್.ಗುಂಜಾಳಮತ್ತು ಡಾ.ಎಸ್. ಎಲ್. ಸಂಗಮ ಇವರು ಸಂಗ್ರಹಿಸಿ ನೀಡಿರುವ ಆನಂದ ಕಂದದ ಕೃತಿ ಸೂಚಿ, ಅವರನ್ನು ಕುರಿತು (ವ್ಯಕ್ತಿ ಮತ್ತು ಸಾಹಿತ್ಯ) ಗ್ರಂಥಗಳು **ಆನಂದ ಕಂದದ** ಸಮಗ್ರ ಸಾಹಿತ್ಯವನ್ನು ಅಧ್ಯಯನ ಮಾಡುವವರಿಗೆ ಬಹು ಉಪಯುಕ್ತ.

---

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath



**ಅಚ್ಚಾದ ಪುಸ್ತಕ** ತೆರೆದ–ಅಂಚೆ

*ಶ್ರೀಮತಿ/ಶ್ರೀ*..........................................................................

..........................................................................

..........................................................................

*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭